# ಪಂಚಮ

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ಲೇಖನ-ಸುದ್ದಿ ಕಳುಹಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.

ಸಂಪುಟ : 4 ಸಂಚಿಕೆ : 13-14 5, ಸೆಪ್ಟೆಂಬರ್ 1980 ಪಾಕ್ಷಿಕ ಬೆಲೆ : 20 ಪೈಸೆ ವಾರ್ಷಿಕ ಚಂದಾ 5 ರೂ. ಗಳು

## ದಲಿತರಿಂದ ಬಿದರೆಕಾವಲು ಭೂ ಆಕ್ರಮಣ

[ಪಂಚಮ ಪ್ರತಿನಿಧಿಯಿಂದ]

ಕರ್ನಾಟಕದಲ್ಲಿ ಸಾವಿರಾರು ಎಕರೆಗಳಷ್ಟು 'ಅಮೃತ್ ಮಹಲ್ ಕಾವಲು ಜಮೀನು' ಉಳುಮೆ ಕಾಣದೆ ಬಿದ್ದಿದೆ. ಹಿಂದೆ ಸರ್ಕಾರ ವಿದೇಶಗಳಿಂದ ಹಸುಗಳನ್ನು ತರಿಸಿ ಬಹುದೊಡ್ಡ ಡೈರಿಮಾಡುವ ಯೋಜನೆಯೊಂದನ್ನು ಹಾಕಿದ್ದು. ವಿದೇಶಗಳಿಂದ ಬರುವ ಹಸುಗಳು ಮೇಯುವುದಕ್ಕೆಂದು ಹುಲ್ಲುಬೆಳೆಸಲು ಕಾದಿಟ್ಟ ಭೂಮಿ ಇದು. ಈಗ ಆ ಯೋಜನೆ ಕೈಬಿಟ್ಟಿದೆ. ಅದಕ್ಕಾಗಿ ಕಾದಿರಿಸಿದ ಭೂಮಿ ಕೂಡ ಖಾಲಿ ಬಿದ್ದಿದೆ.

ಈ ಯೋಜನೆಗೆ ಸೇರಿದ ಸುಮಾರು 800 ಎಕರೆ ಭೂಮಿ ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಗಂಡಸಿ ಹೋಬಳಿ ಸರ್ವೆ ನಂ. 4 ರಲ್ಲಿತ್ತು. ಅಕ್ಕಪಕ್ಕದ ಊರುಗಳ ಭೂಹೀನ ಬಡವರು ಈ ಭೂಮಿಯನ್ನು ತಮಗೆ ಮಂಜೂರು ಮಾಡಿಕೊಡಬೇಕೆಂದು ಸರ್ಕಾರಕ್ಕೆ ಅರ್ಜಿ ಹಾಕಿಕೊಂಡರು. ಬಡತನದಿಂದ ನರಳುತ್ತ ತುತ್ತು ಗಂಜಿಗಾಗಿ ಪರದಾಡುವ ಇವರು ಆ ಭೂಮಿಯನ್ನು ಉತ್ತು-ಬೆಳೆತೆಗೆದು ತಮ್ಮ ಹಸಿವನ್ನು ಹಿಂಗಿಸಿಕೊಳ್ಳುವ ಕನಸು ಕಂಡರು. ಭೂಮಿಗಾಗಿ ಕಾದುಕುಂತವರಿಗೆ ಸಿಕ್ಕಿದ್ದು ಭೂಮಿಯಲ್ಲ; ಸರ್ಕಾರದ ಯಥಾ ಪ್ರಕಾರದ ಮೌನ. ಆದರೆ ಇಂಥದೇ ಭೂಮಿಯನ್ನು ಜಮೀನ್ದಾರರು-ರಾಜಕಾರಣಿಗಳು ಒಳಗೊಳಗೇ ಮಂಜೂರು ಮಾಡಿಸಿಕೊಂಡು ಆರಾಮವಾಗಿದ್ದಾರೆ. ಕದೀಮ ರಾಜಕಾರಣಿಗಳನ್ನು, ಸರ್ಕಾರಿ ಕಾನೂನುಗಳನ್ನು ಒಲಿಸಿಕೊಳ್ಳಲು ಬಡವರಲ್ಲಿ ಹಣ ಇಲ್ಲ-ಪ್ರಭಾವ ಇಲ್ಲ. ಇವ್ಯಾವೂ ಇಲ್ಲದ ಅವರಿಗೆ ಭೂಮಿ ದಕ್ಕಲಿಲ್ಲ.

ಸರ್ಕಾರದ ಕೃಪೆ ಬೀಳಲಿಲ್ಲ ಎಂದು ಕೈಕಟ್ಟಿ ಕೂರುವ ಸ್ಥಿತಿಯಂತೂ ಇಲ್ಲ. ಬೆಳಗಿನಿಂದ ಸಂಜೆಯ ತನಕ ಜಮೀನುದಾರರ ತೆಂಗಿನ ತೋಟಗಳಲ್ಲಿ-ಜಮೀನುಗಳಲ್ಲಿ ಬೆವರು ಚೆಲ್ಲಿ ದುಡಿದರೂ, ಆ ದುಡಿತಕ್ಕೆ ಸಿಗುವ ಕಾಸು ತಮ್ಮ, ತಮ್ಮ ಮಕ್ಕಳ ಹಸಿವನ್ನು ತಣಿಸಲಾರದಷ್ಟು. ಬಡತನದಿಂದ ನರಳುತ್ತಿರುವ ಮಾನುಷ್ಯರು. ಹಸಿವಿನಿಂದ ಕಂಗಾಲಾಗಿ ತಮ್ಮ ಆಸೆ-ಆಕಾಂಕ್ಷೆಗಳು ಹೊಸಗಿ ಹೋಗುತ್ತಿರುವುದನ್ನು ಅರಿಯತೊಡಗಿದರು. ಬದುಕಬೇಕೆಂಬ ಹಂಬಲ ಹೊಂದಿದ ಅವರು ತಮ್ಮ ಸಿಟ್ಟನ್ನು ತಮ್ಮ ಸಹನೆಯನ್ನು ಎಷ್ಟು ಕಾಲ ಬಚ್ಚಿಟ್ಟುಕೊಳ್ಳಲು ಸಾಧ್ಯ. ಅವರಿಗೆ ಬಾಕಿ ಉಳಿದಿದ್ದ ದಾರಿ ಅಂದರೆ ಸಂಘಟಿತರಾಗುವುದು. ಭೂಮಿ ಆಕ್ರಮಿಸಿಕೊಳ್ಳುವುದು.

(3ನೇ ಪುಟ ನೋಡಿ)

## ಭೂ ತಡೆ ವಿರೋಧಿಸಿ ಪ್ರತಿಭಟನೆ

ವರದಿ : ವೆಂಕಟಸ್ವಾಮಿ

ಕರ್ನಾಟಕ ಸರ್ಕಾರ ಇತ್ತೀಚಿನ ವರ್ಷಗಳಲ್ಲಿ ಅನೇಕ ಭೂಸುಧಾರಣೆ ತಂದು ದಲಿತರಿಗೆ ಭೂಮಿ ಹಂಚುತ್ತೇನೆ ಎಂದಿತು. ಸಾಕಷ್ಟು ಕಡೆ ದರಖಾಸ್ತು ಮತ್ತು ಇನಾಮತಿ ಜಮೀನು ಹಂಚಿತು. ಆದರೆ ಜಮೀನುದಾರರು ದಲಿತರ ಜಮೀನುಗಳನ್ನೆಲ್ಲ ಲಪಟಾಯಿಸಿ ದಲಿತರಿಗಿದ್ದ ಜಮೀನಿನ ಹಕ್ಕನ್ನೇ ಮೊಟಕುಗೊಳಿಸಲು ಹೈಕೋರ್ಟ್‌ನಿಂದ ಈವತ್ತು ಸಹಸ್ರಾರು ತಡೆಯಾಜ್ಞೆಗಳನ್ನು ತಂದು ದಲಿತರ ಹೊಟ್ಟೆಮೇಲೆ ಕ್ರೂರ ಕಾನೂನಿನ ಬರೆ ಎಳೆದಿದ್ದಾರೆ.

ದಲಿತರನ್ನು ಕೊಲ್ಲುತ್ತಿರುವ ಈ ಕುರುಡು ಕಾನೂನುಗಳಿಂದ ಹೈಕೋರ್ಟ್ ನೀಡಿರುವ ತಡೆಯಾಜ್ಞೆಗಳನ್ನು ರದ್ದುಗೊಳಿಸುವಂತಹ ಬಿಗಿ ಕ್ರಮ ಕೈಗೊಳ್ಳಬೇಕೆಂದು ಆಗಸ್ಟ್ 15ರ ಕರಾಳ ದಿನಾಚರಣೆ ಅಂಗವಾಗಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಂಗಳೂರಿನಲ್ಲಿ ಬೃಹತ್ ಮೆರವಣಿಗೆ ನಡೆಸಿ ಸರ್ಕಾರವನ್ನು ಒತ್ತಾಯಪಡಿಸಿತು.

ಚಿಕ್ಕಮಗಳೂರು, ಶಿವಮೊಗ್ಗ, ಭದ್ರಾವತಿ, ಚಿತ್ರದುರ್ಗ, ತಿಪಟೂರು, ತುಮಕೂರು, ಕೋಲಾರ, ಕೆ. ಜಿ. ಎಫ್, ಚಿಂತಾಮಣಿ, ಹೊಸಪೇಟೆ, ಮೈಸೂರು, ಹುಣಸೂರು, ನಂಜನಗೂಡು ಮುಂತಾದ ಕಡೆಗಳಿಂದ ದಲಿತರು ಭೂಮಿ ಸಮಸ್ಯೆ ಮತ್ತು ಕರಾಳದಿನಾಚರಣೆಗೆಂದು ಬಸ್ಸು, ಮತ್ತು ರೈಲುಗಳಿಂದ ನೂರಾರು ಮಂದಿ ತಂಡತಂಡವಾಗಿ ಬೆಂಗಳೂರಿಗೆ ಬಂದಿಳಿದ ಸಂಘರ್ಷ ಸಮಿತಿ ಕಾರ್ಯಕರ್ತರು ನಿಲ್ದಾಣಗಳಿಂದಲೇ ಘೋಷಣೆಗಳೊಡನೆ ತಮ್ಮ ಬ್ಯಾನರ್ ಹಿಡಿದು ಸಿಲ್ವರ್ ಜ್ಯೂಬಿಲಿ ಪಾರ್ಕ್ ನತ್ತ ನಡೆದರು.

(2ನೇ ಪುಟ ನೋಡಿ)

# ಭೂ ತಡೆ ವಿರೋಧಿಸಿ ದ. ಸಂ. ಸ. ಪ್ರತಿಭಟನೆ

(1ನೇ ಪುಟದಿಂದ)

‘ದಲಿತರು ಬರುತ್ತಿರುವರು ದಾರಿಬಿಡಿ’ ಎಂಬಂತೆ ಶಿಸ್ತಿನ ಸಿಪಾಯಿಗಳಾಗಿ ಬರುತ್ತಿದ್ದ ಕಾರ್ಯಕರ್ತರ ತಂಡಗಳನ್ನು ಅಲ್ಲಲ್ಲಿ ಬೀದಿ ನಾಯಿಗಳಂತೆ ಸುತ್ತುತ್ತಿದ್ದ ಪೊಲೀಸರು ದಾರಿಯಲ್ಲೇ ಅಡ್ಡಗಟ್ಟಿ ಎಲ್ಲಿಗೆ ? ಏನು ? ಎಂದಾಗ “ಈವತ್ತು ನಮ್ಮ ಕಾರ್ಯಕ್ರಮ ಗೊತ್ತಿಲ್ಲವೆ” ? ಎಂದು ಡಿಯಸ್ಸೆಸ್ ಕಾರ್ಯಕರ್ತರು ನಾಚಿಸಿ ಮುನ್ನಡೆದರು.

ಹೀಗೆ ತಂಡತಂಡವಾಗಿ ಬಂದ ಕಾರ್ಯಕರ್ತರು ಸಿಲ್ವರ್ ಜ್ಯೂಬಿಲಿ ಪಾರ್ಕಿನಲ್ಲಿ ಸುಮಾರು ಮೂರು ಸಾವಿರದಷ್ಟು ನೆರೆದರು. ಆಯಾ ಜಿಲ್ಲಾ ಶಾಖೆಗಳು ತಮ್ಮ ಬ್ಯಾನರ್‌ಗಳ ಸಹಿತ ಮೆರವಣಿಗೆಗೆ ನಿಂತ ಉದ್ದವಾದ ಸಾಲು ಸುಮಾರು ಒಂದು ಫರ್ಲಾಂಗ್‌ಗೂ ಹೆಚ್ಚು ದೂರ ಬೆಳೆದಿತ್ತು. ಮೆರವಣಿಗೆಯ ಮುಂಚೂಣಿಯಲ್ಲಿ ಕಾರ್ಯಕರ್ತರು ಕಪ್ಪು ಬಾವುಟ ಮತ್ತು ರಾಜ್ಯಸಮಿತಿ ಬ್ಯಾನರ್ ಹಿಡಿದು ಹೆಜ್ಜೆಯಿಡಲು ಮುಂದಾದಂತೆ ರಾಜ್ಯ ಸಂಚಾಲಕ ಕೃಷ್ಣಪ್ಪ ಅವರು ಮುಂದೆ ಕಾರ್ಯಕರ್ತರತ್ತ ಮುಖಮಾಡಿ “ಜೋರ್ ಸೆ ಬೋಲೋ ಪ್ಯಾರ್ ಸೆ ಬೋಲೋ” ಎಂದು ಕೈಎತ್ತಿ ಘೋಷಣೆ ಹಾಕಿದಾಗ “ಡಿಯಸ್ಸೆಸ್ ಜಿಂದಾಬಾದ್” ಎಂದು ಕಾರ್ಯಕರ್ತರು ಕಿವಿಗಡಚಿಕ್ಕುವ ಹಾಗೆ ಕೂಗಿ ಮುನ್ನಡೆದರು.

ದಲಿತರ ದರಖಾಸ್ತ್, ಇನಾಂ ಜಮೀನುಗಳ ಮೇಲಿನ ತಡೆಯಾಜ್ಞೆಗಳು ರದ್ದಾಗಲಿ, ಹಸಿವು-ಅಸ್ಪೃಶ್ಯತೆ ಇಲ್ಲದ ಸ್ವಾತಂತ್ರ್ಯಕ್ಕಾಗಿ ನಮ್ಮ ಹೋರಾಟ, ಯಾರಿಗೆ ಬಂತು ? ಎಲ್ಲಿಗೆ ಬಂತು 47ರ ಸ್ವಾತಂತ್ರ್ಯ ? ನಾವ್ಯಾರೂ ಕಾಣದ ಸ್ವಾತಂತ್ರ್ಯ, ಟಾಟಾ-ಬಿರ್ಲಾ ಜೇಬಿಗೆ ಬಂತು, ಮಂತ್ರಿ-ಶಾಸಕರ ಟೊಪ್ಪಿಗೆ ಬಂತು, ಪೊಲೀಸರ ಲಾಠಿ-ಬೂಟಿಗೆ ಬಂತು 47ರ ಸ್ವಾತಂತ್ರ್ಯ. ನಿಂತ-ನೋಡುವ ಜನಗಳಿರಾ ದಲಿತರಿಗೆ ಸ್ವಾತಂತ್ರ್ಯ ಕೇಳಿ” ಎಂಬ ನೂರಾರು ಕಿಚ್ಚಿನ ಘೋಷಣೆಗಳೊಡನೆ ಮೆರವಣಿಗೆ ಬೆಂಗಳೂರಿನ ಜನರನ್ನು ದಂಗುಬಡಿಸಿತು.

ಮೆರವಣಿಗೆ ನಂತರ ಕಬ್ಬನ್ ಪಾರ್ಕಿನಲ್ಲಿ ನಡೆದ ಬಹಿರಂಗ ಸಭೆಯನ್ನುದ್ದೇಶಿಸಿ ಕೃಷ್ಣಪ್ಪ, ಸಿದ್ಧಲಿಂಗಯ್ಯ ಮತ್ತು ಶಂಕರಲಿಂಗೇಗೌಡ ಅವರು ಮಾತನಾಡಿದರು. ದಲಿತರ ದರಖಾಸ್ತ್ ಭೂಮಿ ಮೇಲೆ ಇರುವ ತಡೆಯಾಜ್ಞೆಗಳನ್ನು ಅನೂರ್ಜಿತಗೊಳಿಸುವಂತೆ ಬಿಗಿ ಕಾನೂನು ಕ್ರಮಗಳನ್ನು ಕೈಗೊಳ್ಳಬೇಕೆಂದು ಸರ್ಕಾರವನ್ನು ಒತ್ತಾಯಪಡಿಸಿದ ಕೃಷ್ಣಪ್ಪ ಅವರು ಸರ್ಕಾರಿ ಭೂಮಿ ಇರುವ ಕಡೆಯೆಲ್ಲ ದಲಿತ ಸಂಘರ್ಷ ಸಮಿತಿ ಆಕ್ರಮಿಸಿಕೊಂಡು ದಲಿತರಿಗೆ ಸಮನಾಗಿ ಹಂಚುವುದು. ಈ ಕಾರ್ಯಕ್ಕೆ ಬರುವ ಅಡ್ಡಿ ಆತಂಕ ಎದುರಿಸಲು ದಲಿತರಿಗಾಗಿ ತನ್ನ ರಕ್ತ ಚೆಲ್ಲಲು ಸಂಘರ್ಷ ಸಮಿತಿ ಸಿದ್ಧವಾಗಿದೆ, ಸುಲಿಗೆ-ಶೋಷಣೆ ಇಲ್ಲದ ಸ್ವಾತಂತ್ರ್ಯಕ್ಕಾಗಿ ನಮ್ಮ ಹೋರಾಟ ಎಂದರು.

ಬೆಂಗಳೂರಿಗೆ ಬರಲು ಕಷ್ಟವಾದ ರಾಯಚೂರು ಮತ್ತು ಕುಣಿಗಲ್ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಅವರವರ ಊರುಗಳಲ್ಲೇ ಕರಾಳ ದಿನಾಚರಣೆ ಆಚರಿಸಿದರು. ಮಳವಳ್ಳಿ ದಲಿತ ವಿದ್ಯಾರ್ಥಿ ಕೂಟ ಮತ್ತು ಮಂಡ್ಯ ದಲಿತ ವಿದ್ಯಾರ್ಥಿ ಒಕ್ಕೂಟಗಳು ಆಯಾ ಊರುಗಳಲ್ಲಿ ಕರಾಳ ದಿನಾಚರಣೆ ಆಚರಿಸಿದ ವರದಿಗಳು ಬಂದಿವೆ.

# ಸಾರಿಗೆ ಅವ್ಯವಸ್ಥೆ: ದಲಿತ ವಿದ್ಯಾರ್ಥಿಗಳ ಪ್ರತಿಭಟನೆ

ವರದಿ : ಎನ್. ರಾಜಣ್ಣ

ಅಧಿಕಾರಿಗಳಿಗೆ ಮಂತ್ರಿಗಳಿಗೆ ತಮ್ಮ ಬೇಡಿಕೆ ಈಡೇರಿಕೆಗೆ ಮನವಿ ಕೊಟ್ಟುಕೊಟ್ಟು ಬೇಸತ್ತ ಬೆಂಗಳೂರಿನ ದಲಿತ ವಿದ್ಯಾರ್ಥಿಗಳು ಈ ಮಾರ್ಗದಿಂದ ಏನೂ ಆಗುವುದಿಲ್ಲವೆಂಬುದನ್ನು ಅರಿತುಕೊಂಡರು. ಅವರು ಆಗಸ್ಟ್ 27ರಂದು ಬೆಳಗ್ಗೆ 9 ಗಂಟೆಯಲ್ಲಿ ಮಹಾತ್ಮಾಗಾಂಧಿ ರಸ್ತೆಯ ಕೆ. ಇ. ಬಿ. ಆಫೀಸಿನ ಮುಂದೆ ಆ ಮಾರ್ಗವಾಗಿ ಬಂದ ಸಿಟಿ ಬಸ್ಸುಗಳನ್ನು ಪಿಕೆಟಿಂಗ್ ಮಾಡಿ ನಿಲ್ಲಿಸಿ, ರಸ್ತೆಯ ಮೇಲೆ ಕುಳಿತು ಧರಣಿ ಪ್ರಾರಂಭಿಸಿದರು.

ಇವರೆಲ್ಲಾ ಸರ್ಕಾರಿ ಕಲಾ ಹಾಗೂ ವಿಜ್ಞಾನ ಕಾಲೇಜ್ ಪರಿಶಿಷ್ಟ ಜಾತಿ/ವರ್ಗಗಳ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳು. ತಾವು ಕಾಲೇಜಿಗೆ ಸರಿಯಾದ ವೇಳೆಗೆ ಹೋಗಲು ಬಸ್ ಸೌಲಭ್ಯ ಸಿಗುತ್ತಿಲ್ಲವೆಂದೂ-ಈ ಮಾರ್ಗವಾಗಿ ಬರುವ ಬಸ್ಸುಗಳು ಸ್ಟಾಪಿನಲ್ಲೂ ನಿಲ್ಲಿಸದೆ ತಮಗೆ ತೊಂದರೆಯಾಗುತ್ತಿದೆ ಎಂದು. ಸುಮಾರು 3 ವರ್ಷಗಳಿಂದಲೂ ಕೆ. ಎಸ್. ಆರ್. ಟಿ. ಸಿ. ಅಧಿಕಾರಿಗಳ-ಮಂತ್ರಿಗಳಿಗೆ ಮನವಿ ಮಾಡುತ್ತಾ ಬಂದರು. ಆದರು ಏನೂ ಆಗಲಿಲ್ಲ, ಕೊನೆಗೆ ಬಸ್ಸುಗಳನ್ನು ತಡೆದು ರಸ್ತೆಯಲ್ಲೇ ಧರಣಿ ಕೂತರು.

ಅಷ್ಟರಲ್ಲಾಗಲೆ ಅಲ್ಲಿಗೆ ಪೋಲೀಸರ ಹಾಜರಿ, ವಿದ್ಯಾರ್ಥಿಗಳ ಶಾಂತಿಯುತ ಪ್ರತಿಭಟನೆ ಮುರಿಯಲು ಲಾಠಿಚಾರ್ಜ್ ಮಾಡಿ ಅಮಾನುಷವಾಗಿ ಹೊಡೆದರು. ಎಲ್ಲರನ್ನೂ ಬಂಧಿಸಿ ಅಲಸೂರು ಪೊಲೀಸ್ ಠಾಣೆಯಲ್ಲಿ ಸಂಜೆ 3 ಗಂಟೆಯ ತನಕ ಕೂಡಿದರು. ನಂತರ ಎಲ್ಲರನ್ನೂ ಕೋರ್ಟ್ ಮುಂದೆ ಹಾಜರುಪಡಿಸಿ ವೈಯಕ್ತಿಕ ಜಾಮೀನಿನ ಮೇಲೆ ಬಿಡುಗಡೆ ಮಾಡಿರುವರು.

ವಿದ್ಯಾರ್ಥಿಗಳುಬಸ್ ಸೌಲಭ್ಯ ಕಲ್ಪಿಸಿಕೊಡಿರೆಂದು ಮನವಿ ಮಾಡಿಕೊಳ್ಳುತ್ತಿದ್ದರೂ ಮೌನವಾಗಿರುವ ಅಧಿಕಾರಿ-ಮಂತ್ರಿಗಳ ವರ್ತನೆ, ತಮ್ಮ ಬೇಡಿಕೆ ಮುಂದಿಟ್ಟು ಧರಣಿ ನಡೆಸುತ್ತಿದ್ದ ಅವರ ಮೇಲೆ ಲಾಠಿಚಾರ್ಜ್ ಮಾಡಿ ತಳಿಸಿರುವ ಪೊಲೀಸರ ವರ್ತನೆ ಎರಡೂ ಹೇಯವಾದದ್ದು.

ಈಗ ವಿದ್ಯಾರ್ಥಿಗಳು ತಾವು ಕಾಲೇಜಿಗೆ ಸರಿಯಾದ ವೇಳೆಗೆ ಹೋಗಲು ಒಂದು ಪ್ರತ್ಯೇಕ ಬಸ್ ವ್ಯವಸ್ಥೆ ಆಗಬೇಕೆಂದೂ, ಅಮಾನುಷವಾಗಿ ಹೊಡೆದಿರುವ ಪೊಲೀಸ್ ಅಧಿಕಾರಿಗಳ ಮೇಲೆ ಕಠಿಣ ಕ್ರಮ ತೆಗೆದುಕೊಳ್ಳಬೇಕೆಂದೂ ಸರ್ಕಾರವನ್ನು ಒತ್ತಾಯಿಸಿರುವರು, ಇವು ಈಡೇರದಿದ್ದರೆ ತೀವ್ರವಾದ ಹೋರಾಟ ನಡೆಸುವುದಾಗಿ ಅವರು ತೀರ್ಮಾನ ತೆಗೆದುಕೊಂಡಿದ್ದಾರೆ.

## ಆಗಾಗ್ಗೆ ದಲಿತರ ಸಮಸ್ಯೆ ಚರ್ಚೆಗೆ ದಲಿತ ಸಂಘರ್ಷ ಸಮಿತಿಗೆ ಮುಖ್ಯಮಂತ್ರಿ ಆಹ್ವಾನ

ಎರಡು ತಿಂಗಳಿಗೊಮ್ಮೆ ದಲಿತರ ಸಮಸ್ಯೆಗಳನ್ನು ಕುರಿತು ತಮ್ಮ ಜತೆ ಚರ್ಚಿಸಬೇಕೆಂದು ಮುಖ್ಯಮಂತ್ರಿ ಗುಂಡೂರಾವ್ ಕರ್ನಾಟಕ ದಲಿತ ಸಂಘರ್ಷ ಸಮಿತಿಗೆ ಇತ್ತೀಚೆಗೆ ಮನವಿ ಮಾಡಿಕೊಂಡಿದ್ದಾರೆ.

ದಲಿತರ ದರಖಾಸ್ತು ಮತ್ತು ಇನಾಂ ಜಮೀನುಗಳ ಮೇಲೆ ಭೂಮಾಲೀಕರು ತಂದಿರುವ ತಡೆಯಾಜ್ಞೆಗಳನ್ನು ರದ್ದುಗೊಳಿಸಲು ಬಿಗಿ ಕಾನೂನು ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಲು ಆಗಸ್ಟ್ 15ರ ಕರಾಳ ದಿನ ಆಚರಣೆ ಅಂಗವಾಗಿ ಸಂಘರ್ಷ ಸಮಿತಿ ಬೆಂಗಳೂರಿನಲ್ಲಿ ನಡೆಸಿದ ಬೃಹತ್ ಮೆರವಣಿಗೆಯ ಬೇಡಿಕೆಗಳ ಬಗ್ಗೆ 16 ರಂದು ಗುಂಡೂರಾವ್ ಜತೆ ಸಮಿತಿಯ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ ಅವರ ನೇತೃತ್ವದ ನಿಯೋಗ ಮಾತುಕತೆ ನಡೆಸಿತು.

ದಲಿತರಿಗೆ ಸೇರಬೇಕಾದ ದರಖಾಸ್ತು, ಇನಾಂ ಜಮೀನು ಮತ್ತು ನಿವೇಶನಗಳ ಮೇಲಿನ ಹೈಕೋರ್ಟ್ ತಡೆಯಾಜ್ಞೆಗಳನ್ನು ರದ್ದುಗೊಳಿಸಲು ಬಿಗಿ ಕಾನೂನು ಕ್ರಮ ತೆಗೆದುಕೊಳ್ಳಬೇಕು. ಎಲ್ಲ ಖಾಸಗಿ ಮತ್ತು ಸರ್ಕಾರಿ ಸಂಸ್ಥೆಗಳಲ್ಲಿ ಶೇ. 18 ಮೀಸಲಾತಿಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಬೇಕು. ಎಲ್ಲ ಖಾಸಗಿ ದಲಿತ ವಿದ್ಯಾರ್ಥಿ ನಿಲಯಗಳನ್ನು ಸರ್ಕಾರ ತನ್ನ ವಶಕ್ಕೆ ತೆಗೆದುಕೊಳ್ಳಬೇಕು. ಮತ್ತು ಜೂನ್ 12 ರಂದು ಜಾತಾ ಬಂದ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರ ಮೇಲೆ ಪೊಲೀಸರು ಹೂಡಿರುವ ಸುಳ್ಳು ಮೊಕದ್ದಮೆಗಳನ್ನು ಕೂಡಲೇ ಹಿಂತೆಗೆದುಕೊಳ್ಳಬೇಕೆಂಬ ಬೇಡಿಕೆಗಳನ್ನು ತುರ್ತಾಗಿ ಈಡೇರಿಸುವುದಾಗಿ ಗುಂಡೂರಾವ್ ಒಪ್ಪಿಕೊಂಡರು.

## ದಲಿತರಿಂದ ಬಿದರೆಕಾವಲು ಭೂ ಆಕ್ರಮಣ

[1ನೇ ಪುಟದಿಂದ]

ಹೀಗೆ ಸಂಘಟನೆಗೊಂಡ ಭೂಹೀನ ದಲಿತರು ಬಿದರೆ ಕಾವಲಿನಲ್ಲಿ ಗುಡಿಸಲು ಕಟ್ಟಿದರು. ಮುಳ್ಳು ಗಿಡಗಳನ್ನು ಸವರಿ ರಸ್ತೆ ಮಾಡಿದರು. ಕುಡಿಯುವ ನೀರಿನ ಬಾವಿ ತೆಗೆದರು. ಇಷ್ಟೆಲ್ಲವನ್ನೂ ಸಾಮೂಹಿಕವಾಗಿ ಮಾಡಿದ-ಬದುಕಬೇಕೆಂಬ ಛಲಹೊತ್ತು ಹೋರಾಟದ ಕಣಕ್ಕಿಳಿದ ಅವರು ಹೊಸ ಊರನ್ನೇ ನಿರ್ಮಾಣ ಮಾಡಿದರು.

ಸುಮಾರು 6 ತಿಂಗಳಿಂದ 210 ಕುಟುಂಬಗಳು ಅಲ್ಲೆ ವಾಸಮಾಡತೊಡಗಿರುವರು. ಇವರಲ್ಲಿ ಹೊಲೆ-ಮಾದಿಗರು, ಬೋವಿಗಳು, ಒಕ್ಕಲಿಗರು, ಕುರುಬರು,ಕುಂಬಾರರು, ಹಜಾಮ, ಅಕ್ಕಸಾಲಿಗರು,ಮುಸ್ಲಿಂ ಮತ್ತು ಕ್ರಿಶ್ಚಿಯನ್‌ರು ಇದ್ದಾರೆ. ಇವರೆಲ್ಲಾ ಜಾತಿ ವೈಷಮ್ಯಗಳನ್ನು ಬಿಟ್ಟು ಮನುಷ್ಯ ಮನುಷ್ಯರ ನಡುವೆ ಒಡಕು ಹುಟ್ಟಿಸುವ ಜಾತಿಗಳ ಪ್ರತಿಷ್ಠಿತ ಭಾವನೆಗಳನ್ನೂ ಮರೆಯತೊಡಗಿದ್ದಾರೆ. ಮನುಷ್ಯರೆಲ್ಲಾ ಒಂದೇ ಎಂದು ತಿಳಿದು ಒಟ್ಟಿಗೆ ಬದುಕಲು ಕಲಿಯುತ್ತಿದ್ದಾರೆ. ತಮ್ಮೊಂದಿಗೇ ಬಿಡಾರ ಹೂಡಿರುವ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರಿಂದ ಹೋರಾಟದ ಪಾಠಗಳನ್ನು ಕಲಿಯುತ್ತಿದ್ದಾರೆ,

ಸಂಘರ್ಷ ಸಮಿತಿ ನೇತೃತ್ವದಲ್ಲಿ ಇರುವ ಭೂಮಿಯೆಲ್ಲಾ ಸಮನಾಗಿ ಎಲ್ಲರಿಗೂ ಹಂಚಿಕೆಯಾಗಿದೆ. ಈಗ ಉಳುಮೆ ಮಾಡತೊಡಗಿದ್ದಾರೆ. ಹೊಸ ಊರಿನ ಈ ಹೊಸ ಮನುಷ್ಯರು ಹೊಸ ಮಾನವೀಯ ಸಮಾಜವನ್ನು ನಿರ್ಮಿಸುತ್ತಿದ್ದಾರೆ,

# ಮಾನವೀಯತೆಯನ್ನೇ ನಡುಗಿಸಿದ ಪಿಪ್ರಾ

ಈ ವರ್ಷದ ಆರಂಭದಲ್ಲಿ ಬಿಹಾರದಲ್ಲಿ ನಡೆದ ಪಾರಸ್‌ಬಿಘಾ ಮತ್ತು ಪಿಪ್ರಾ ನರಮೇಧಗಳು ದಲಿತರಲ್ಲಿ ಇನ್ನೂ ನಡುಕಹುಟ್ಟಿಸುವ ಬೀಭತ್ಸ ಘಟನೆಗಳು. ಹೆಂಗಸರು ಮಕ್ಕಳಾದಿಯಾಗಿ ಪಿಪ್ರಾದಲ್ಲಿ 14 ಮಂದಿ ಬೆಂದು ಬೂದಿಯಾದರು. ತಮ್ಮ ದುಡಿಮೆಗೆ ನ್ಯಾಯಬದ್ಧ ಕೂಲಿಕೇಳಿದ ಮಹಾ ಅಪರಾಧಕ್ಕಾಗಿ ಭೂಮಾಲೀಕರು ಅವರನ್ನು ಜೀವಂತ ಸುಟ್ಟರು.

## ವಿಶೇಷ ವರದಿ

ನ್ಯಾಯಕ್ಕಾಗಿ ಬಾಯಿತೆರೆವ ದಲಿತರನ್ನು ಜೀವಂತ ಸುಡುವ ಬಿಹಾರದಲ್ಲಿನ ಬಲಿಷ್ಠ ಭೂಮಾಲೀಕಶಕ್ತಿ, ಅದರ ಸಂಚು, ರಾಜಕೀಯಶಕ್ತಿಯನ್ನು ಬಯಲಿಗೆಳೆಯುವ ಯತ್ನವನ್ನು ಪತ್ರಿಕೆಗಳಾಗಲಿ, ರಾಜಕಾರಣಿಗಳಾಗಲಿ ಅಥವ ಯಾವ ರಾಜಕೀಯ ಪಕ್ಷಗಳಾಗಲಿ ಮಾಡಲಿಲ್ಲ. ಪಾರಸ್ ಬಿಘಾವಾಗಲೀ ಪಿಪ್ರಾ ಘಟನೆಯನ್ನಾಗಲಿ ಕೇವಲ ಘಟನೆ ನಡೆದದ್ದಷ್ಟನ್ನೇ ತಮ್ಮ ಮೂಗಿನ ನೇರಕ್ಕೆ ನೋಡಿ ಅವುಗಳ ಹಿಂದಿದ್ದ ಸಂಚಿನ ಕುಕೃತ್ಯಗಳನ್ನೆಲ್ಲ ಹಾಗೆಯೇ ಮುಚ್ಚಿಟ್ಟವು.

ಪಿಪ್ರಾ ನರಮೇಧದ ನಿಜಸಂಗತಿಗಳ ಬಗ್ಗೆ ಬಿಹಾರದಿಂದ ಇತ್ತೀಚೆಗೆ ಪಂಚಮಕ್ಕೆ ಬಂದ ಮಾಹಿತಿಗಳನ್ನು ಇಲ್ಲಿ ಕೊಡಲಾಗಿದೆ.

ಪೂನ್ ಪೂನ್ ಪ್ರದೇಶ ಸೂಕ್ಷ್ಮ ಪ್ರದೇಶವೆಂದು ಘೋಷಿಸಲ್ಪಟ್ಟದ್ದು ಭೂಮಾಲೀಕರ ಅಮಾನವೀಯ ಶೋಷಣೆಯನ್ನು ಗುರುತಿಸಿಕೊಂಡ ಅಲ್ಲಿನ ಭೂಹೀನ ದಲಿತರು, ಕೃಷಿಕಾರ್ಮಿಕರು ಕೂಲಿ ಹೆಚ್ಚಿಸಬೇಕೆಂಬ ಮತ್ತಿತರ ಬೇಡಿಕೆಗಳಿಗಾಗಿ ಇತ್ತೀಚೆಗೆ ಸಂಘಟಿತ ಹೋರಾಟ ನಡಸುತ್ತಲೇ ಬಂದಿರುವರು. ಇದನ್ನು ಸಹಿಸಲಾಲಾಗದ ಭೂಮಾಲೀಕಶಕ್ತಿ ದಲಿತರ ಹೋರಾಟದ ದನಿಯನ್ನೇ ದಮನಮಾಡಲು ನಿರಂತರ ದೌರ್ಜನ್ಯ ನಡೆಸುತ್ತಲೇ ಬಂದಿದೆ, ಹೀಗಾಗಿ ಅಲ್ಲಿ ಆಗಾಗ್ಗ ಘರ್ಷಣೆಗಳು ನಡೆಯುತೊಡಗಿವೆ.

ಪಿಪ್ರಾ ಕುಗ್ರಾಮ ಸಮೀಪದ ಪೂನ್ ಪೂನ್ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದುದು. ಬಿಹಾರದ ರಾಜಧಾನಿ ಪಾಟ್ನಾ ನಗರಕ್ಕೆ ಅಷ್ಟೇನೂ ದೂರವಿಲ್ಲ.

ಈ ಪ್ರದೇಶವು ಕುರ್ಮಿ ಭೂಮಾಲೀಕರ ಪ್ರಾಬಲ್ಯವುಳ್ಳದ್ದು. ಇವರೆಲ್ಲ ಇತ್ತೀಚಿನ ವರ್ಷಗಳಲ್ಲಿ ತಲೆಎತ್ತಿ ನಿಂತವರು. ಸ್ವಾತಂತ್ರ್ಯ ಪೂರ್ವದಲ್ಲಿ ಈ ಪ್ರದೇಶದ ಭೂಒಡೆತನವೆಲ್ಲ ಸಾಮಾನ್ಯವಾಗಿ ಮುಸ್ಲಿಮರ ಕೈಯಲ್ಲಿತ್ತು. ಪಾಕಿಸ್ತಾನ ವಿಭಜನೆಯಾದಾಗ ಮತ್ತು ರಾಜ್ಯವಾರು ವಿಂಗಡಣೆಯಾದಾಗ ಅನೇಕ ಮುಸ್ಲಿಮರು ತಮ್ಮ ಜಮೀನು, ಮನೆಮಠಗಳನ್ನೆಲ್ಲ ತೊರೆದು ಸುರಕ್ಷಿತ ಸ್ಥಳಗಳಿಗೆ ವಲಸೆಹೋದರು.

ಅಷ್ಟರಲ್ಲಿ "ಜಮೀನುದಾರಿ ರದ್ಧತಿ ಕಾಯಿದೆ" ಜಾರಿಗೆ ಬಂದಾಗ ಕುರ್ಮಿಗಳು ಲಭ್ಯವಿದ್ದ ಕಡೆಯಲೆಲ್ಲ ಭೂಮಿಹಿಡಿದು ಭೂಒಡೆಯರಾಗಿ ಬೆಳೆದರು. ಹೀಗೆ ಹೊಸದಾಗಿ ಹುಟ್ಟಿಕೊಂಡ ಕುರ್ಮಿ ಭೂಮಾಲೀಕರು ಹಿಂದೆಂದಿಗಿಂತಲೂ ಇಂದಿನ ದಿನಗಳಲ್ಲಿ ಹಳ್ಳಿಗಳಲ್ಲಿ ದಲಿತರು, ಕೃಷಿ
ಕಾರ್ಮಿಕರ ಮೇಲೆ ನಿರಂತರ ದೌರ್ಜನ್ಯ ನಡೆ
ತ್ತಲಿರುವರು. ಚುನಾವಣೆಗಳ ಮೂಲಕ ರಾ
ಕೀಯ ಪ್ರವೇಶಿಸಿ ಗ್ರಾಮಪಂಚಾಯತಿಯಿಂ
ರಾಜ್ಯದ ಅಧಿಕಾರದ ಮೇಲೆ ಇವರು ಇಟ
ಕೊಂಡಿರುವ ಪ್ರಬಲ ಹತೋಟಿಯು ದಲಿತರನ
ಶೋಷಿಸುವ, ಹಿಂಸಿಸುವ ಕೃತ್ಯಗಳಿಗೆ ಇನ್ನಷ
ಕುಮ್ಮಕ್ಕು ದೊರೆತಂತಿದೆ.

ರಾಜಕೀಯ ಅಧಿಕಾರದ ರಕ್ಷಣೆ ದೊರೆ
ಮೇಲಂತೂ ಈ ಭೂಮಾಲೀಕರು ತಮ
ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ
ಶೋಷಣೆಯನ್ನು ಇಮ್ಮಡಿಗೊಳಿಸಿಕೊಂಡರು
ಜೀತಗಾರಿಕೆ, ಕೂಲಿಗೆಕಾಳು, ಶೇರ್‌ಕ್ರಾಪಿಂಗ
ಮೂಲಕ ದಲಿತರ ಮೇಲೆ ತಮ್ಮ ನಿಯಂತ್ರ
ಇಟ್ಟುಕೊಂಡರು. ಎಲ್ಲಂದರಲ್ಲಿ ದಲಿತರನ
ಜೀವಂತ ಸುಡುವುದು, ಅವರ ಹೆಂಗಸರನ
ಅತ್ಯಾಚಾರ ಮಾಡುವುದು ಮಂತಾದ ಅಮಾ
ಯಕ ಕೃತ್ಯಗಳಲ್ಲಿ ತೊಡಗಿದರು.

ಇಂತಹ ಕ್ರೂರ ದಬ್ಬಾಳಿಕೆಗಳ ತಡೆಗಾಗಿ ದ

# ಜಾತಿಗಳ ಹುಟ್ಟು ಮತ್ತು ಬೆಳ

[ಕಳೆದ ಸಂಚಿಕೆಯಿಂದ]

ಅಧಿಕ ಪುರುಷನ ಸಮಸ್ಯೆ ಅಧಿಕ ಮಹಿಳೆಯ ಸಮಸ್ಯೆಗಿಂತ ಮುಖ್ಯವಾದದ್ದು. ಕಾಲಾನುಕಾಲದಿಂದಲೂ, ಪುರುಷನನ್ನು ಮಹಿಳೆಗಿಂತ ಒಂದು ಕೈ ಮೇಲೆಂದು ಭಾವಿಸಲಾಗಿದೆ. ಗಂಡು ಹೆಣ್ಣಿನ ನಡುವೆ ಇರುವ ಅಸಮಾನತೆ ಈ ಸಮಸ್ಯೆಯನ್ನು ಬಗೆಹರಿಸುವಲ್ಲಿ ಪಾತ್ರವಹಿಸುತ್ತದೆ. ಸ್ತ್ರೀಯರನ್ನು ನಿರಂತರ ಶೋಷಣೆಗೆ ಒಳಪಡಿಸಿ ತಾನೇ ಸಕಲ ಕಾಯಿದೆಗಳನ್ನು ಪುರುಷ ನಿರ್ಮಿಸಿದ್ದರಿಂದ ಸಮಸ್ಯೆಗೆ ಸೂಚಿಸುವ ಪರಿಹಾರದಲ್ಲೂ ಪಕ್ಷಪಾತವಿದೆ. ಅಧಿಕ ಪುರುಷನನ್ನು ಆತ ಪುರುಷನೆಂಬ ಕಾರಣಕ್ಕಾಗಿ ಮೃತಪತ್ನಿಯ ಜೊತೆ ಸುಡುವುದಿಲ್ಲ. ಯಾವುದೇ ಜಾತಿ ತನ್ನ ಜಾತಿಯ ಗಂಡನೊಬ್ಬನನ್ನು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಈತನನ್ನು ಎರಡು ರೀತಿಯಲ್ಲಿ ಉಳಿಸಿಕೊಳ್ಳಲು ವ್ಯವಸ್ಥೆ ಮಾಡಲಾಗಿದೆ.

ಜಾತಿ ಪದ್ಧತಿಗೆ ಗಂಡಸು ಮತ್ತು ಸಗೋ
ವಿವಾಹ ಎರಡೂ ಮುಖ್ಯ. ಕೆಲವರು ಆ
ವಪರ್ಯಂತ ವಿಧುರರಾಗಿಯೇ ಇದ್ದು ಸ್ವ
ಆರೋಪಿತ ಬ್ರಹ್ಮಚರ್ಯವನ್ನು ಅನುಭ
ಬಹುದು. ಅಥವಾ ಇನ್ನೂ ಮುಂದೆ ಹೋ
ವಿಶ್ವವನ್ನೇ ತಿರಸ್ಕರಿಸಬಹುದು. ಆದರೆ ಮಾ
ಸ್ವಭಾವಕ್ಕೆ ಇದು ವಾಸ್ತವ ಪರಿಹಾರವಲ್ಲ.

---

ಮೂಲ : ಬಿ. ಆರ್. ಅಂಬೇಡ್ಕರ್

ಸಂಗ್ರಹಾನುವಾದ : ಸಿದ್ಧಲಿಂಗಯ್ಯ

---

ಅಧಿಕ ಪುರುಷ ಒಂದು ನಿರ್ದಿಷ್ಟ ಗುಂ
ಲ್ಲಿದ್ದು, ಗುಂಪಿನ ಚಟುವಟಿಕೆಗಳಲ್ಲಿ ಭಾಗವ
ತ್ತಾನೆ. ಆಧುನಿಕ ನೈತಿಕ ಮೌಲ್ಯಗಳಿಗೆ ಇವನ
ಗಂಡಾಂತರ ಇದ್ದೇ ಇದೆ. ಒಬ್ಬ ವಿ
ಪ್ರಪಂಚವನ್ನು ತಿರಸ್ಕರಿಸುವುದು ಮತ್ತು ಹೆ
ಜೊತೆಯಲ್ಲಿ ಚಿತೆಗೇರುವುದಕ್ಕೆ ಗಾಢ

# ನರಮೇಧದ ಕೆಲವು ನಿಜಸಂಗತಿಗಳು

ರೂ ಸಹ ಅಲ್ಲಲ್ಲಿ ಸಂಘಟಿತರಾಗತೊಡಗಿ ರು. ಅನೇಕ ಕಡೆ ಪ್ರತಿಭಟನೆಗಳನ್ನು ಮಾಡಿ ರು.

ೆದ ವರ್ಷ ಈ ಪ್ರದೇಶದಲ್ಲಿ ತೀವ್ರ ಅಭಾವ ದೆದೋರಿತು. ಈ ಅನಾವೃಷ್ಟಿಗೆ ಸಿಕ್ಕಿ ಾರ ಹಸಿವಿನಿಂದ ನರಳಿದ ದಲಿತರು ತಾವೇ ತ್ರ-ಬೆವರು ಸುರಿಸಿ ಬೆಳೆದು ಶ್ರೀಮಂತರ ಕಣಜ ನ್ನು ತುಂಬಿದ್ದ ದವಸಧಾನ್ಯಗಳಿಗಾಗಿ ಕೈಚಾ ದರು. ಕೆಲವು ಗ್ರಾಮಗಳ ಭೂಮಾಲೀಕರು ಲಿತರು ಒಡ್ಡಿದ ್ಯಗಳಿಗೆ ಧಾನ್ಯನೀಡಿದರು. ದರೆ ಪಿಪ್ರಾದ ಕ್ರೂರ ಭೂಮಾಲೀಕರು ಅದ ಲ್ಲೂ ಕಾಲಿಯನ್ ಚೌಕ್‌ನ ಭೂಮಾಲೀಕರು ವಸಧಾನ್ಯ ನಿರಾಕರಿಸಿದ್ದು ಮಾತ್ರವಲ್ಲ ದಲಿ ದ ಹಸಿದ ಹೊಟ್ಟೆಗೆ ಅನ್ನ ನೀಡದಂತೆ ಬೇರೆ ೆಯ ಭೂಮಾಲೀಕರ ಮೇಲೂ ಒತ್ತಾಯ ಂದರು. ಈ ನಡುವೆ ದಲಿತರು ಕನಿಷ್ಟ ಕೂಲಿ ಗಿ ತಮ್ಮ ಹೋರಾಟ ನಡೆಸುತ್ತಲೇ ಇದ್ದರು. ಬಗೆಯ ಹೋರಾಟವನ್ನ ಸಹಿಸಲಾಗದ

## ೆಗೆ-೨

ತ್ಯಾಸವೇನಿಲ್ಲ ಸ್ವಯಂ ಆರೋಪಿತ ಬ್ರಹ್ಮ ರ್ಯವು ಯಾವ ಪ್ರಯೋಜನವನ್ನೂ ತರುವು ಲ್ಲ. ಜಾತಿಯ ಹಿತದೃಷ್ಟಿಯಿಂದ ಅವನು ಹಸ್ಥನಾಗಿರಬೇಕು. ಅದಕ್ಕಾಗಿ ಇವನಿಗೊಬ್ಬ ಂಗಾತಿಯನ್ನು ಒದಗಿಸುವ ಹೊಣೆ ಗುಂಪಿನ ಾಗಿರುತ್ತದೆ. ಬಾಗಿಲುಗಳನ್ನು ಸ್ವಯಂಮುಚ್ಚಿ ಾಂಡ ಜಾತಿಗಳಲ್ಲಿ ಜನಸಂಖ್ಯೆಯ ಪ್ರಮಾಣ ಂದು ಹೆಣ್ಣಿಗೆ ಒಂದು ಗಂಡಾಗಿರುವುದರಿಂದ ಲ್ಲಿ ಹೆಣ್ಣಿನ ಸಮಸ್ಯೆ ಉದ್ಭವಿಸುತ್ತದೆ. ಅಷ್ಟೆ ಂದ ಅಧಿಕ ಪುರುಷನಿಗೆ ವಿವಾಹಯೋಗ್ಯ ಲ್ಲದ ವಯಸ್ಸಿನ ಹುಡುಗಿಯೊಬ್ಬಳನ್ನು ಮದು ಮಾಡಿಸಬೇಕಾಗುತ್ತದೆ. ಇದರಿಂದ ಆತ ಾತಿಯ ಒಳಗೇ ಉಳಿದು ಸಗೋತ್ರವಿವಾಹ ುತ್ತು ಜಾತಿಯ ನೀತಿಗಳನ್ನು ಕಾಪಾಡಿಕೊಂಡು ರಲು ಸಾಧ್ಯ. ಈಗ ನಾಲ್ಕು ರೀತಿಗಳಿಂದ ೆಣ್ಣು ಮತ್ತು ಗಂಡಿನ ಅಸಮಾನತೆಯನ್ನು ಳಿಸಿಕೊಂಡು ಬರಲು ಅನುಕೂಲವಾಯಿತು.

ಭೂಮಾಲೀಕರು ದಲಿತರ 'ರೈತಸಂಘ'ವನ್ನು ನಾಶಮಾಡುವ ದಿಕ್ಕಿನಲ್ಲಿ ಗ್ರಾಮದ ಜನರನ್ನು ಜಾತಿಯ ಆಧಾರದ ಮೇಲೆ ಒಗ್ಗೂಡಿಸಿದರು. ಜಾತೀಯತೆ ನೆಲೆಯಲ್ಲಿ ನಿಂತ ಭೂಮಾಲೀಕರು "ರೈತ ಹಿತರಕ್ಷಣ ಸಂಘ"ದ ಹೆಸರಿನಲ್ಲಿ ಸಶಸ್ತ್ರ ಗುಂಪನ್ನೇ ಕಟ್ಟಿದರು. ಈ ಸಶಸ್ತ್ರ ಗುಂಪಿನ ಈ ಸಂಘಕ್ಕೆ ಬಂದೂಕಿನಿಂದ ಹಿಡಿದು ಅಗತ್ಯ ನೆರವನ್ನು ನೀಡದ ಕುರ್ಮಿ ಜಾತಿಯ ಮಧ್ಯಮ ಅಥವಾ ಶ್ರೀಮಂತ ಭೂಮಾಲೀಕರಿಗೂ ಹೆದ ರಿಸಿ ದಂಡ ವಿಧಿಸುವ ಕ್ರಮ ಕೈಗೊಂಡರು,

ರೈತ ಹಿತರಕ್ಷಣ ಸಂಘದ ಹೆಸರಿನಲ್ಲಿ ಪಿಪ್ರಾದ ಆಳ್ವಿಕೆ ನಡೆಸುತ್ತಾ ಬಂದ ಕೆಲ ಭೂಮಾಲೀ ಕರು ಪೊಲೀಸರಿಗೆ ತಿಳಿದಂತೆಯೇ ಮುಖ್ದುಮ್ ಪುರ್ ಶಾಲೆಯಲ್ಲಿ ಆಗಾಗ್ಗೆ ಸಭೆ ನಡೆಸಿ ದಲಿ ತರ ಮೇಲೆ ನಿರಂತರವಾಗಿ ಸುಸಂಘಟಿತ ಹಲ್ಲೆ-ದೌರ್ಜನ್ಯ ನಡೆಸುತ್ತಾ ಬಂದರು. ಲೈಸನ್ಸ್ ಮತ್ತು ಲೈಸನ್‌ರಹಿತ ಶಸ್ತ್ರಗಳನ್ನು ಹೊಂದಿದ್ದ ಈ ಗುಂಪು ಕಮಾಲ್ಲರ, ಲೋಚನ,ಸಬಾಜ್‌ಪುರ್,ಬದೇಪುರ್,

## ವಿಶೇಷ ಲೇಖನ

1. ವಿಧವೆಯನ್ನು ಗಂಡಿನ ಜೊತೆಯಲ್ಲಿ ಸುಡುವುದು (ಸತಿಪದ್ಧತಿ)
2. ಕಡ್ಡಾಯ ವೈಧವ್ಯ
3. ಒತ್ತಾಯ ಪೂರ್ವಕ ಬ್ರಹ್ಮಚರ್ಯ
4. ಹೆಣ್ಣಿನ ಬಾಲ್ಯವಿವಾಹ

ಮೇಲೆ ಸೂಚಿಸಿದ ನಾಲ್ಕು ಪದ್ಧತಿಗಳನ್ನು ಕುರಿತಂತೆ ವೈಜ್ಞಾನಿಕವಾದ ವಿವರಣೆ ಬಂದೇ ಇಲ್ಲ. ಆದರೆ ಇವುಗಳನ್ನು ಗೌರವಿಸುವ ಅನೇಕ ವಾದಗಳಿವೆ. ಅವು ಈ ಪದ್ಧತಿಗಳ ಹುಟ್ಟು ಮತ್ತು ಅಸ್ತಿತ್ವದ ಕಾರಣಗಳನ್ನು ಹೇಳುವುದಿಲ್ಲ. ಸತಿ ಪದ್ಧತಿಯನ್ನು ಹೆಣ್ಣುಗಂಡಿನ ದೇಹ ಮತ್ತು ಆತ್ಮದ ಮಿಲನದ ಸಂಕೇತವೆಂದೂ, ಸಾವಿನ ನಂತರದ ಪ್ರೇಮ ಜೀವನವೆಂದು ಹೇಳಿ ಗೌರ

(ಕಡೇ ಪುಟ ನೋಡಿ)

ಬಾದಾ ಮುಂತಾದ ಗ್ರಾಮಗಳ ಮೇಲೆ ನಿಯೋ ಜಿತ ಹಲ್ಲೆ ನಡೆಸಿತು. ಕೆಲವಡೆ ಈ ಹಲ್ಲೆ ಗಳನ್ನು ಗ್ರಾಮಸ್ಥರು ವಿಫಲಗೊಳಿಸಿದರು.

ಇಂತಹ ಹಲ್ಲೆಗಳನ್ನು ಈ ಭೂಮಾಲೀಕರು ಪೊಲೀಸ್ ನೆರವಿನಿಂದಲೇ ಮಾಡುತ್ತಿದ್ದರೆಂಬುದು ಜನಜನಿತ ಮಾತು.

ಭೂಮಾಲೀಕರನ್ನು ನಿಃಶಸ್ತ್ರಗೊಳಿಸಿ ದಮನ ಕೃತ್ಯಗಳನ್ನು ತಡೆಯಿರಿ. ಕನಿಷ್ಟ ವೇತನ ಜಾರಿ ಗೊಳಿಸಿ, ಅನಾವೃಷ್ಟಿಗೆ ಸಿಕ್ಕಿ ನರಳುತ್ತಿರುವ ನಮಗೆ ಸಹಾಯಮಾಡಿ ಎಂಬ ಬೇಡಿಕೆಗಳನ್ನು ಮುಂದಿಟ್ಟು ಅನೇಕ ಗ್ರಾಮಗಳ ಭೂಹೀನರು ದಲಿತರೆಲ್ಲ ಒಗ್ಗೂಡಿ ಇತ್ತ ಕಳೆದ ಡಿಸೆಂಬರ್‌ನಲ್ಲಿ ಬಿ. ಡಿ. ಓ. ಕಚೇರಿ ಮುಂದೆ ಪ್ರದರ್ಶನ ನಡೆಸಿದರು. ಇಂತಹದೇ ಬೇಡಿಕೆಗಳನ್ನು ಮುಂದಿಟ್ಟು ಪಟ್ನಾ ಜಿಲ್ಲೆಯ ಸುಮಾರು 3000 ಜನ ಜಿಲ್ಲಾ ಮ್ಯಾಜಿಸ್ಟ್ರೇಟ್ ಕಚೇರಿ ಮುಂದೆ ತಮ್ಮ ಅಳಲನ್ನು ವ್ಯಕ್ತಪಡಿಸಿದರು. ಆದರೆ ಅಧಿಕಾರಿಗಳು ಈ ಬೇಡಿಕೆಗಳನ್ನು ಪುರಸ್ಕರಿಸಿ ಶಸ್ತ್ರಸಜ್ಜಿತ ಭೂಮಾಲೀಕರ ವಿರುದ್ಧ ಕ್ರಮಕೈಗೊಳ್ಳುವ ಬದಲು ಸಣ್ಣಪುಟ್ಟ ಕಾರಣ ಗಳಿಗಾಗಿ ಬಡವರ ಮೇಲೆಯೇ ಪೊಲೀಸ್ ಕಠಿಣ ಕ್ರಮಗಳನ್ನು ಕೈಗೊಂಡರು.

ಪಾರಸ್‌ಬಿಘಾ ನರಮೇಧದ ನಂತರ ದಲಿತರ-ಕೃಷಿಕಾರ್ಮಿಕರ ಎದೆಗುಂದಿಸಿ ಅವರ ಸಂಘಟನಾ ಶಕ್ತಿಯನ್ನೇ ಹತ್ತಿಕ್ಕಲು ಪಿಪ್ರಾದ ಭೂಮಾಲೀ ಕರು ಸಹ "ಎಲ್ಲರನ್ನು ಕೊಲ್ಲಿ, ಸುಡಿ ಮತ್ತು ಲೂಟಿಮಾಡಿ" ಎಂಬ ನೀತಿ ಅನುಸರಿಸಿದರು. ಇಂದಿರಾ ಕಾಂಗ್ರೆಸ್‌ಗೆ ಸೇರಿದ ಈ ಭೂಮಾ ಲೀಕರೆಲ್ಲ ನೆರೆಯ ಪಾರಸ್‌ಬಿಘಾದಲ್ಲಿ ನರಮೇಧ ನಡೆಸಿದ ಕ್ರೂರಕೊಲೆಗಡುಕ ಭೂಮಾಲೀಕರ ನೆರವು ಕೋರಿದರು.

ಕಾಂಗ್ರೆ ಭೂಮಾಲೀಕರು ಪಿಪ್ರಾದ ದಲಿತರನ್ನು ಸುಡಲು ಅನೇಕ ದಿನಗಳಿಂದ ಹೊಂಚುಹಾಕಿ ಸಮಯ ಕಾಯುತ್ತಿದ್ದರೆಂಬುದಕ್ಕೆ ರಸ್ತೆಯಲ್ಲಿ

(ಕಡೇ ಪುಟ ನೋಡಿ)

# ದಲಿತರು ಕಂಡ ಸ್ವಾತಂತ್ರ್ಯ

## ಬಾವುಟದ ಕೆಳಗೆ

ಇನ್ನೊಂದು ತಾಯಿ ಹೊಟ್ಟೇಲಿ ಹುಟ್ದಂಗೆ
ಮುಸೀವ್ನ್ಗೆ ಎದ್ದು ರಾಗಿಬೀಸಿ
ರೊಟ್ಟಿ ಸುಟ್ಟು
ತೊಡೆಮ್ಯಾಲೆ ಕುಂಡ್ರಿಸ್ಕಂಡು
ಕೋಳಿ ಕಾವೆ ಕುಂಡ್ರಿಸ್ದಂಗೆ
ತಲೆಗೋಚ್ತ ಇದ್ಲು
ರೊಟ್ಟಿ ತಿನ್ತಾ
ಹಣೆ, ಕೆನ್ನಗೆ
ದೃಷ್ಟಿ ಬಟ್ ಇಕ್ದಾಗ
ಕಣ್ಣಗೆ ಇಳ್ದೋದ್ಲು ನಮ್ಮವ್ವ
ಗದ್ದೆ ಬಯ್ಲುಬಿದ್ದು ಓಡ್ತಾ ಇದ್ದೆ
ಬೆಟ್ಟಬಿದ್ದ ಇಲಿಯಂಗೆ
ಹೊತ್ತು ಹುಟ್ಟಿ ಆಳುದ್ದ ಬತ್ತಾ ಇತ್ತು
ಸೂಜಿಅಂಗೆ
ಬಿದ್ದಂಬೀಳ ಹೋದ್ರುನೆ
'ಪ್ರೆಯರ್ಗೆ ಬರಲಿಲ್ಲ' ?
'ಲೇಟ್ ಲತೀಫ್'
'ನಮ್ಮ ಬಾವುಟ'
ಬೈಹಾರ್ಟ ಮಾಡಿದ್ದೀಯಾ ?
ಹೂ....! ಸಾರ್....
ಹೇಳು :
'ಹಾರುತಿಹುದು ಏರುತಿಹುದು
ನೋಡು ನಮ್ಮ ಬಾವುಟ
ಕೇಸರಿ, ಬಿಳಿ, ಹಸಿರು ಮೂರು....
.... .... .... .... .... .... .... ....
ನಾಲ್ಗೆ ತಿದ್ದಿ ತಿದ್ದಿ ಹೇಳ್ಸಿದ್ರು
ಮೇಸ್ಟ್ರು ಕಣ್ಣೊಳ್ಗೆ ಕುಣಿತಿದ್ದೆ
ನಮ್ಮಪ್ಪನಿಗೂ ಹೇಳಿದ್ರಂತೆ
'ನಿಮ್ ಹುಡ್ಗ ಚೂಟಿ ಅವ್ನೆ'
'ನಿಮ್ ಜಾತೀಲೆ ಹುಟ್ಬ್ಯಾಡ್ದಾಗಿತ್ತು'

2

ಬಾವುಟದ ಕಡೆ ನೋಡುದ್ರೆ
ಕಣ್ಗೆ ಅಚ್ಚೆ ಚುಚ್ದಂಗಾತದೆ
ಕಾಲ್ ಸಂದ್ಗೆ ತಲೆ ಹಿಕ್ತಿನಿ
ಝೂಡ್ಸಿ ವದ್ದಂಗಾತದೆ
ನೆಲೆ ಕಚ್ತಿನಿ ಉಡಕಚ್ದಂಗೆ
ಕೂಗೋ ನಾಲ್ಗಿಗೆ ಹುಳ ಬಿದ್ದಂಗೆ
ಎತ್ತೊ ಕೈಗೆ ನೆಲಪಟ್ ಬಡ್ದಂಗೆ
ಕಚ್ಚೊ ತುಟಿಗೆ ಗೆದ್ಲಿಕ್ಸದಂಗೆ
ನಡುಬೆನ್ನಿಗೊಂದು
ಕಂಬ ನೆಟ್ಟವ್ರೆ
ಅಪ್ಪನ ಚಡ್ಡಿ-ಅವ್ವನ ಸೀರೆ
ಬಾವುಟ್ದ ಹಾರಾಡ್ದಂಗಾತದೆ
ಅಪ್ಪನ ಕಡೆ ಬೆನ್ಮಾಡಿ
ಅವ್ವನ ನೋಡ್ಬೇಕಾ ?
ಅವ್ವನ ಕಡೆ ಬೆನ್ಮಾಡಿ
ಅಪ್ಪನ ನೋಡ್ಬೇಕಾ ?
ಥೂ..........!
ಕಣ್ ಗುಡ್ಡೆ ನೆಟ್ಟಿದ್ದೀನಿ ನೆಲಕೆ.

—ಕೆ. ಬಿ. ಸಿದ್ದಯ್ಯ

## ಆಗಸ್ಟ್ ಹದಿನೈದು

ಆಗಸ್ಟದಿನೈದರ, ಎಲೇ
ಗಂಡನ ತಿಂದ
ಜಾಣರಂಡೆ;

ನನ್ನ ಕೋಟ್ಯಾನು ಕೋಟಿ
ದಲಿತ ಜೀವಗಳ ಮೆಚ್ಚಿ
ಮೆರೆದಿರುವ
ಮೂರುಪದ
ನೂರಾರು ವೇಷದ
ನಿನ್ನ
ಘೋರ ಕರಾಳ ಸ್ವಾತಂತ್ರ್ಯ
ಬಾವುಟಕೆ ಧಿಕ್ಕಾರ !

ಕರಗಿಸಿ ನನ್ನವರ ಜೀವಸ್ರುವ
ಬೆರಸಿ ಪುಡಿ ಮೂಳೆ ಮಾಂಸವ
ಮಾಡಿಸಿಕೊಂಡಿರುವೆ
ದಮನ ಬಾವುಟದ ಕಂಬವ

ಅದ ತಂದು
ನೀನಿಂದು
ಉಳಿದೆನ್ನವರ
ಸಜೀವ ಸಮಾಧಿಯು ಮೇಲೆ
ನೆಟ್ಟಿರುವೆ

ಅದೇ ಒಂದಲ್ಲಾವೊಂದು
ಆಗಸ್ಟದಿನೈದರಂದು
ಆ ಕಂಬವ ಕಿತ್ತು ತಂದು
ನಿನ್ನ ತೂತಿಗೆ ಸಿಗಿಸಲು
ನಾ ಹುಟ್ಟಿರುವೆ—
ಕರಿಮೋಡದೊಡನಿರುವೆ
ಬರಸಿಡಿಲಿನೊಳಗಿರುವೆ
ಮುಂಗಾರ ಕೆಂಬೆಳಗ
ಕಾಯುತಿರುವೆ......................

—ಮುನಜ

## ಪುಸ್ತಕ ವಿಮರ್ಶೆ

# ಹೊಸ ಸಾಹಿತ್ಯದ ಹುಟ್ಟಿನ ಮೊದಲ ಹಂತ

**ಪಂಚಮ ಮತ್ತು ನೆಲಸಮ [ನಾಟಕಗಳು] ಸಿದ್ಧಲಿಂಗಯ್ಯ, ಪ್ರಕಾಶಕರು : ಪಂಚಮ ಪ್ರಕಾಶನ, ಲಕ್ಷ್ಮೀನಾರಾಯಣಪುರ, ಬೆಂಗಳೂರು-560 021.**

**ಪುಟ : 50 ಬೆಲೆ : 4 ರೂ.**

ಮೇಲ್ನೋಟಕ್ಕೆ ಶಾಲೆಗಳಲ್ಲಿ ಆಡುವ ನಾಟಕಗಳನ್ನು ನೆನಪಿಗೆ ತರುವ ಸಿದ್ಧಲಿಂಗಯ್ಯನವರ ಎರಡು ನಾಟಕಗಳಾದ 'ಪಂಚಮ' ಮತ್ತು 'ನೆಲಸಮ'ಗಳು ಓದುಓದುತ್ತಾ ವ್ಯಂಗ್ಯದ ಛಾಯೆಯನ್ನು ದಟ್ಟವಾಗಿ ಬೀರುತ್ತಾ ಹೋಗುತ್ತದೆ. ಸರಳವಾದ ಸಂಭಾಷಣೆಯಲ್ಲೇ ಎದೆಗೆ ಒದೆಯುವಂಥ ಮಾತುಗಳು, ಕ್ರೂರತೆಯ ವಾಸ್ತವಿಕ ಚಿತ್ರಣವನ್ನು ನಾಟಕಕಾರರು ಮಾಡಿಕೊಡುವುದರಿಂದ, ಹುಡುಗಾಟದಲ್ಲಿ ಆರಂಭವಾಗುವ ಈ ಎರಡು ನಾಟಕಗಳು ಗಂಭೀರವಾದ ವಿಚಾರವನ್ನು ಮಂಡಿಸಿ ಮುಗಿಯುದೆಯೇ ವಿಚಾರಮಂಥನದ ಬಿಸಿಯುಟ್ಟಿಸುತ್ತದೆ.

ದಲಿತರ, ಬಡವರ ಶೋಷಣೆಯ ಕ್ರೌರ್ಯವನ್ನು ತೋರಿಸುವುದರತ್ತ ಈ ಎರಡೂ ನಾಟಕಗಳು ಸಾಗುತ್ತವೆ. ಈಗ ಸಿಡಿದು ನಿಂತಿರುವ 'ಬಂಡಾಯ' ದನಿಯ ಸಾಹಿತ್ಯದ ಸ್ಪಷ್ಟ ಮೈಕಟ್ಟನ್ನು ರೂಢಿಸಿಕೊಂಡಿರುವ ಈ ನಾಟಕಗಳ ರಚನೆಯ ಮೂಲಕ ಸಿದ್ಧಲಿಂಗಯ್ಯ ದಲಿತರ ಬದುಕಿನಲ್ಲಿರುವ ಗುಲಾಮಗಿರಿಯ ವಿರುದ್ಧ ಸಿಡಿಯುತ್ತಾರೆ. ಎಲ್ಲೆಂದರಲ್ಲಿ ಆಡಬಹುದಾದ, ಜನಸಾಮಾನ್ಯರನ್ನು ಸರಳವಾಗಿ ಸುಲಭವಾಗಿ ಒಳಗೊಳ್ಳಲು ಅನುಕೂಲವಾಗುವಂತೆ ಹಾಡಗಳನ್ನೂ ಬಳಸಿಕೊಂಡು ಆಡಬಹುದಾದ ನೆಲಸಮ ಮತ್ತು ಪಂಚಮ ನಾಟಕಗಳಲ್ಲಿ 'ಪ್ರೇಕ್ಷಕ'ರನ್ನು ಕೆಣಕುವ, ಉದ್ರೇಕಿಸುವ ಗುಣ ಬಹಳ ಇದೆ. ಈ ರಂಗಪ್ರಜ್ಞೆ ಹಾಗೂ ಜನರ ಮನೋಗತಿಯನ್ನು ಅಳತೆ ಮಾಡಿಯೇ ನಾಟಕ ಬರೆದಿರಬಹುದಾದ ಲಕ್ಷಣಗಳನ್ನು ನಾಟಕದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು,

'ಪಂಚಮ' ನಾಟಕದಲ್ಲಿ ಹರಿಜನ ನಿರುದ್ಯೋಗಿ ಪದವೀಧರರಿಗೆ ತಾತ್ಕಾಲಿಕ ಉದ್ಯೋಗ ನೀಡುವ ಸಲುವಾಗಿ ಸಂದರ್ಶನ ನಡೆಯುತ್ತದೆ. ಸಂಪೂರ್ಣ ಸಂದರ್ಶನವೇ ನಾಟಕ. ಸಂದರ್ಶಕ: ಹಯವದನ ರಾವ್, ಐ. ಎ. ಸ್. ಆಫೀಸರ್, ನಾಟಕಕಾರರ ದೃಷ್ಟಿಯಲ್ಲಿ ಈತ ಶೋಷಕರ ಪ್ರತೀಕ ನಾಲ್ಕು ಜನಕ್ಕೆ ಸಂದರ್ಶನವಾದನಂತರ ಕೊನೆಯದಾಗಿ 'ಪಂಚಮ' ಬರುತ್ತಾನೆ. ಬಂದ ಕೂಡಲೇ ಹಯವದನರಾವ್ "ನೀವು ಕೊನೆಯವರು ಆದ್ದರಿಂದ ಬಹಳ ಹೊತ್ತು ಕಾಯಿಸ್ದೆ" ಅನ್ನುತ್ತಾನೆ. "ಬಿಡಿಸಾರ್, ಸಾವಿರಾರು ವರ್ಷಾನೆ ಕಾದಿದ್ದೀವಿ ಈ ನಿಮಿಷದ್ದು ಯಾವ ಲೆಕ್ಕ?" ಎನ್ನುತ್ತಾನೆ ಪಂಚಮ ಒಂದೇ ಮಾತಿನಲ್ಲಿ ದಲಿತರ ಇಡೀ ಬದುಕಿನ ಚಿತ್ರವನ್ನು ಆತ ಕೊಟ್ಟುಬಿಡುತ್ತಾನೆ. ಇದುವರೆಗೆ ದರ್ಬಾರ್ ನಡೆಸಿದ ಹಯವದನರಾವ್‌ನ ಚಿತ್ರ ಪಂಚಮನ ಆಗಮನದಿಂದ ಕೊಂಚ ಕೊಂಚವಾಗಿ ಕರಗುತ್ತಾ ಬರುತ್ತದೆ. ಆತ ತೋರಿದ ಯಾವ ಆಶೆ, ಆಮಿಷಗಳಿಗೂ ಬಗ್ಗದ ಪಂಚಮ: "ನಿಮ್ ಭಿಕ್ಷೆ ರಾಜ್ಯ ಹೋಗ್‌ಬೇಕು. ಸಮತಾ ರಾಜ್ಯ ಬರಬೇಕು...ಆದ್ರೆ ನಿಮ್ಮಂಥೋರು ನಮ್ಮ ಜನರಿಗೆ ಸುಳ್ಳು ಭರವಸೆಕೊಟ್ಟು ಭ್ರಮೇಲಿ ಮುಳುಗಿಸಿದ್ದೀರಾ. ನಿಮ್ಮ ಸುಳ್ಳು ನಿಲ್ಲಬೇಕಾದ್ರೆ ನಿಮ್ಮ ಉಸಿರಾಟ ನಿಲ್ಲಬೇಕು. ನಿಮ್ಮ ಕಬ್ಬುಣದ ಬೇಲಿಯಿಂದ ತಪ್ಪುಸ್‌ಕೊಂಡು ಹೊರಗೆ ಬರೋವರ್ಗೂ ನಮ್ಗೆ ಸಮಾಧಾನ ಇಲ್ಲ...ನಮ್ಗೆ ಸಮಾನತೆ ಬೇಕು" ಎಂದು ತನ್ನ ಸ್ಪಷ್ಟ ಗುರಿಯನ್ನು ಸಾರುತ್ತಾನೆ ಮತ್ತು ಅಂದಿನವರೆಗೆ ತಡೆದುಕೊಂಡು ಬಂದ ರೋಷವನ್ನು ಒಮ್ಮೆಲೇ ಸ್ಫೋಟಿಸುವಂತೆ ಅವನನ್ನು ಬಡಿಯ ತೊಡಗುತ್ತಾನೆ "ಎಡಸ್ಕೊಂಡ್ರೆ ಹೇಗ್ ಆಯ್ತದೆ ಅನ್ನೋದನ್ನು ಈಗ್‌ಲಾದ್ರೂ ತಿಳ್ಕೋ" ಎಂದು ತಾವು ಎಚ್ಚೆತ್ತಿರುವ ಬಗ್ಗೆ ಸೂಚನೆ ಕೊಡುತ್ತಾನೆ. "ಸಾವಿರ ಸಾವಿರ ವರ್ಷದಿಂದ ನಿಮ್ಮ ಮಾತ್ ನಂಬಿದ್ದೀವಿ, ನಿಮ್ಮ ಬೂಟ್ ನೆಕ್ಕಿದ್ದೀವಿ. ನಿಮಗೆ ಓಟ್ ಹಾಕಿದ್ದೀವಿ. ನಿಮ್ ಹೆಂಡ ಎಂಜಲು ತಿಂದಿದ್ದೀವಿ, ಆದ್ರೆ ಕಾಲ ಬದಲಾಗಿದೆ. ನಮಗೆ ನಾಯಿ ಪಾಡು ಬೇಡ. ಮನುಷ್ಯರಥರಾ ಬದುಕಬೇಕು" ಎಂದು ಹೇಳುತ್ತಲೇ ಪಂಚಮ ಹಯವದನರಾಯನಿಗೆ ಒದೆಯುತ್ತಿರುವಂತೆಯೇ ನಾಟಕ ಮುರಿಯುತ್ತದೆ. ನಾಟಕಕಾರರಲ್ಲಿರುವ ನಿಲುವು ಸ್ಪಷ್ಟವಾಗಿರುವುದರಿಂದ, ಅವರು ತೋರಬೇಕಾದ ಹಾದಿಯ ಅರಿವು ಹೆಜ್ಜೆ ಹೆಜ್ಜೆಗೂ ಜಾಗೃತವಾಗುವುದರಿಂದ ನಾಟಕ ಅರ್ಥವತ್ತಾಗುತ್ತದೆ. ಹೇಳುವುದನ್ನು ಸ್ಪಷ್ಟವಾದಿಯೇ ತೆರೆದಿಟ್ಟಿದ್ದಾರೆ ಸಿದ್ಧಲಿಂಗಯ್ಯ.

'ನೆಲಸಮ' ನಾಟಕ ಸಂಜಯಗಾಂಧಿ ಮಾಡಿದ ಒಂದು ದೌರ್ಜನ್ಯದ ಕತೆ. ನಗರ ಮಧ್ಯದ ಕೊಳಚೆ ಪ್ರದೇಶವನ್ನು ನಾಶಮಾಡಿ, ಅಲ್ಲಿ ಸುಂದರವಾದ ಉದ್ಯಾನವನವನ್ನು ನಿರ್ಮಿಸಿದ ಘಟನೆಯೇ ಈ ನಾಟಕಕ್ಕೆ ಪ್ರೇರಣೆ ಎನಿಸುತ್ತದೆ, ಇದು ಸಂಜಯಗಾಂಧಿ ಮಾತ್ರವೇ ಅಲ್ಲ ಅಂಥಹ ಎಷ್ಟೋ 'ಮರಿಸಂಜಯ'ಗಳಿಂದ ದಿನನಿತ್ಯ ಆಗುತ್ತಿರುವ ಕೆಲಸವಾದ್ದರಿಂದ ನಾಟಕ ಸಾರ್ವತ್ರಿಕವಾಗುತ್ತದೆ. ಇಲ್ಲೂ ಸಿದ್ಧಲಿಂಗಯ್ಯ ಮಾತಿನ ಮೊನೆಯನ್ನು ಹರಿಯ ಬಿಡುತ್ತಾರೆ. ಸಂಭಾಷಣೆಯಲ್ಲಿ ತುಂಬಿ ತುಳುಕುವ ವ್ಯಂಗ್ಯ ಕಪ್ಪನೆ ಬಾರಿಸುವಷ್ಟು ತೀಕ್ಷ್ಣವಾಗಿವೆ, ಒಂದೆಡೆ 'ಚಂದ್ರಮ್ಮ'ನ ಗುಣಗಾನವಾಗುತ್ತಿದ್ದಂತೆಯೇ ಮತ್ತೊಂದೆಡೆ ಆಕೆಯ ಮಗ 'ವಿಜಯ' "ಬಡವರು ಭಾರತದ ಶತ್ರುಗಳು, ನಮಗೆ ಬೇಕಾಗಿರುವುದು ಕುರೂಪಿಗಳಾದ ಬಡವರಲ್ಲ. ಸುಂದರವಾದ ಶ್ರೀಮಂತರು, ನಮಗೆ ಬೇಕಾಗಿರುವುದು ಗುಡಿಸಲುಗಳಲ್ಲ, ಪಾರ್ಕುಗಳು" ಎನ್ನುತ್ತಿರುತ್ತಾನೆ, ಗುಡಿಸಲುಗಳು ನೆಲಸಮವಾಗುತ್ತದೆ. ಬಡಜನ ಹೆಣವಾಗುತ್ತಾರೆ. ಅಧಿಕಾರದ ಮದದಲ್ಲಿ, ರಾಜಕೀಯ ಜಬರಿನಲ್ಲಿ ಲಾಲಸೆಯಲ್ಲಿ ತೊಡಗಿರುವ ರಾಜಕಾರಣಿಗಳ ಪುಂಡತನ, ಚಮಚಾಗಿರಿಯನ್ನು ಈ ನಾಟಕ ಬಹಿರಂಗವಾಗಿ ಹರಾಜು ಹಾಕುತ್ತದೆ, ಬದಲಾಣೆಯಾಗುತ್ತಿರುವ ಸಾಮಾಜಿಕ ಪರಿಸರಕ್ಕೆ ಪರಿಸ್ಥಿತಿಗೆ ಸಿದ್ಧಲಿಂಗಯ್ಯನವರ ಈ ನಾಟಕಗಳು ಸ್ಪಂದಿಸುತ್ತಿವೆ. ಸೆಟೆದು ನಿಂತ ಈ ನಾಟಕಗಳ ಮೂಲಕ ಹೊಸ ಸಾಹಿತ್ಯದ ಹುಟ್ಟಿನ ಮೊದಲ ಹಂತ ಆರಂಭವಾಗುತ್ತಿದೆ.

—ವಿನಯ್

# ಮಾನವೀಯತೆಯನ್ನು ನಡುಗಿಸಿದ ಪಿಪ್ರಾ ನರಮೇಧದ ಕೆಲವು ನಿಜಸಂಗತಿಗಳು

(ಮಧ್ಯದ ಪುಟದಿಂದ)

ದಲಿತರಿಗೆ ಸಿಕ್ಕ ಒಂದು ಪ್ರಮುಖ ರಹಸ್ಯ ಪತ್ರದಿಂದ ಗೊತ್ತಾಗುತ್ತದೆ.

ಈ ಪತ್ರ ಸಿಕ್ಕಿದ ನಂತರ ಭಯಗ್ರಸ್ತರಾಗಿದ್ದ ದಲಿತರು ಮೇಲಾಧಿಕಾರಿಗಳಿಗೆ ಪತ್ರದ ಪ್ರತಿಗಳನ್ನು ಕಳುಹಿಸಿ ಜೀವ ಉಳಿಸಿ ಎಂದು ಮೊರೆಯಿಟ್ಟರು. ಆದರೆ ಅಧಿಕಾರಿಗಳು ಅದನ್ನು ಅಲಕ್ಷಿಸಿ ಯಾವ ಮುನ್ನೆಚ್ಚರಿಕೆ ಕ್ರಮಗಳನ್ನಾಗಲಿ ಕೈಗೊಳ್ಳಲಿಲ್ಲ.

ಪಿಪ್ರಾ ನರಮೇಧದ ಯೋಜಿತ ಸಂಚಿನಲ್ಲಿ ಕಲಿಯಾನ್ ಚೌ॰ನ ಕಾಂಗ್ರೆ ಬೆಂಬಲಿಗರ ಜತೆಗೆ ಅದೇ ಪಕ್ಷದ ನಾಯಕರೆನಿಸಿಕೊಂಡ ಚಿಕೀರಾದ ಗೋದನ್ ಸಿಂಘ್, ಲಡ್ಡು ಸಿಂಘ್ ಮತ್ತು ಧರಾರದ ಸಿ. ಪಿ. ಐ. ಪಕ್ಷದ ಬಿಪಿನ್ ಬಿಹಾರಿಸಿಂಘ್ ಮೊದಲಾದವರೂ ಕೂಡ ಸೇರಿದ್ದಾರೆ.

ರಾಜಕೀಯ ಪ್ರಭಾವಿತ ಈ ಮೂವರು ಭೂಮಾಲೀಕರು ಕೆಲವು ನೂರು ಭಿಘಾ ಜಮೀನನ್ನು ಹೊಂದಿದ್ದಾರಲ್ಲದೆ ಇವರ ಅಮಾನುಷ ನಡವಳಿಕೆಗಳ ಬಗ್ಗೆ ಇಡೀ ಜಿಲ್ಲೆಯ ಜನ ಅಸಹ್ಯ ದೃಷ್ಟಿಯಲ್ಲಿ ನೋಡುತ್ತಾರೆ.

ಪಿಪ್ರಾ ಕಗ್ಗೊಲೆಯ ಯೋಜನೆ ರೂಪಿಸಲು, ಚರ್ಚಿಸಲು, ಮೂಷುರ್ಬಿಯಾ ತೊಲೆಗಳ ಉಗ್ರಾಣದ ಯಜಮಾನ ಮತ್ತು ಕಮಾಲ್‌ಪುರದ ಭೂಮಾಲೀಕ ಗಿರೀಶ್‌ಸಿಂಘ್‌ನ ಮನೆಯೇ ಕೊಲೆಗಡುಕ ಭೂಮಾಲೀಕರು ಸಭೆ ನಡೆಸುತ್ತಿದ್ದ ಸ್ಥಳವಾಗಿತ್ತು.

ಕಾಂಗ್ರೆಗೆ ಸೇರಿದ ಈ ಕೊಲೆಗಡುಕ ಭೂಮಾಲೀಕರು ಕೊನೆಗೂ ಫೆಬ್ರವರಿ 25ರಂದು ತಮ್ಮ 500 ಮಂದಿ ಶಸ್ತ್ರಸಜ್ಜಿತ ಗೂಂಡಾ ಗುಂಪಿನೊಡನೆ ಪಿಪ್ರಾ ಗ್ರಾಮವನ್ನು ಮುತ್ತಿ 14 ಮಂದಿ ದಲಿತರನ್ನು ಗುಂಡಿಕ್ಕಿ ಜೀವಂತ ಸುಟ್ಟರು. ಈ ನರಮೇಧದಲ್ಲಿ ನಾಲ್ಕು ಮಕ್ಕಳು, ಐವರು ಗಂಡಸರು, ನಾಲ್ವರು ಮಹಿಳೆಯರು ಮತ್ತು ವೃದ್ಧನೊಬ್ಬ ಬಲಿಯಾದರು.

ದಾಳಿಗೆ ಸಿಕ್ಕಿ ದಿಕ್ಕುತೋಚದ ದಲಿತರು ಆಗ ತಾನೆ ಅರ್ಧಂಬರ್ಧ ಕಟ್ಟಿದ್ದ ಆಯಕಟ್ಟಿನ ಮನೆಯೊಂದರಲ್ಲಿ ಸೇರಿ ಕೊಲೆಗಡುಕರತ್ತ ಧೈರ್ಯದಿಂದ ಕಲ್ಲು-ಇಟ್ಟಿಗೆ ಚೂರುಗಳನ್ನು ತೂರುತ್ತಿದ್ದರು. ಅತ್ತ ತಮ್ಮ ಮನೆಗಳು-ಗುಡಿಸಲುಗಳು ಉರಿಯುತ್ತಿದ್ದವು. ಗುಂಡೇಟಿಗೆ ಸಿಕ್ಕಿ ಬೆಂಕಿಗೆ ಎಸೆಯಲ್ಪಟ್ಟವರ ಕೀರಲು, ಅರಣ್ಯರೋದನ ದನಿ ಕರಳು ಕತ್ತರಿಸುತ್ತಿತ್ತು. ಊರಿಗೆ ಊರೇ ಹತ್ತಿ ಉರಿಯುತ್ತಾ ಬಡವರ ಒಡಲನ್ನು ದಹಿಸುತ್ತಿತ್ತು.

ರಾತ್ರಿ ಸುಮಾರು 10ಗಂಟೆಗೆ ಆರಂಭವಾದ ದಾಳಿ ಮುಂಜಾನೆ 2 ಗಂಟೆ ಹೊತ್ತಿಗೆ ನಿಂತಿತು. ಅಪ್ಪೊತ್ತಿನವರೆಗೂ ದಲಿತರೂ ತಮ್ಮ ಪ್ರತಿ ಹೋರಾಟ ಮುಂದುವರೆಸಿದ್ದರು. ಕೇವಲ 4 ಮೈಲಿ ದೂರದಲ್ಲಿರುವ ಪೂನ್‌ಪೂನ್ ಪೊಲೀಸರಿಗೆ ಪಕ್ಕದ ಊರಿನ ಚೌಕಿದಾರನೊಬ್ಬ ಸುದ್ದಿ ಮುಟ್ಟಿಸಿದರೂ ಸಕಾಲಕ್ಕೆ ಬಂದು ದಲಿತರ ಜೀವ ಉಳಿಸಲಿಲ್ಲ.

ಆದರೆ ದಲಿತರನ್ನು ರಕ್ಷಿಸದ ಈ ಪೊಲೀಸರು ಈಗಲೂ ಭೂಮಾಲೀಕರ ರಕ್ಷಣೆಗಾಗಿ ನಾಯಿಗಳಂತೆ ಅವರ ಮನೆಗಳೆದುರು ನಿಂತಿದ್ದಾರೆ. ಅತಿ ಕ್ರೂರಿಯಾದ ಮಹಾದ್ದಿಪುರದ ಭೂಮಾಲೀಕನ ಮನೆ ಎದುರು ಈಗಲೂ ಪೊಲೀಸರ ಕ್ಯಾಂಪೇ ಇದೆ. ಪಿಪ್ರಾ ಕಗ್ಗೊಲೆಯಲ್ಲಿ ಭಾಗಿಗಳಾದ ಎಲ್ಲ ಭೂಮಾಲೀಕರು ಶಸ್ತ್ರಸಜ್ಜಿತ ಪೋಲಿಸರ ರಕ್ಷಣೆಯಲ್ಲಿ ಸುರಕ್ಷಿತವಾಗಿ ರಾಜಾರೋಷವಾಗಿ ತಿರುಗಾಡುತ್ತಿದ್ದಾರೆ.

# ಜಾತಿಗಳ ಹುಟ್ಟು ಮತ್ತು ಬೆಳವಣಿಗೆ

(ಮಧ್ಯದ ಪುಟದಿಂದ)

ವಿಸಲಾಗಿದೆ. ಬಾಲ್ಯ ವಿವಾಹವನ್ನು ಇದೇ ಧಾಟಿಯಲ್ಲಿ ಸಮರ್ಥಿಸಲಾಗಿದೆ. ಹುಡುಗಿಗೆ ಲೈಂಗಿಕ ಪ್ರಜ್ಞೆ ಬರುವ ಮುನ್ನವೇ ತಾನು ಪ್ರೀತಿಸಬೇಕಾದ ವ್ಯಕ್ತಿ ಯಾರೆಂದು ಅರಿವಾಗಲು ಬಾಲ್ಯವಿವಾಹ ಉಪಯುಕ್ತವೆಂದು ಡಾ॥ ಕೇತ್ಕರ್ ಹೇಳುತ್ತಾರೆ. ನನ್ನ ಅಭಿಪ್ರಾಯದಂತೆ ಸತಿಪದ್ಧತಿ, ಒತ್ತಾಯ ಪೂರ್ವಕ ವೈಧವ್ಯ, ಬಾಲ್ಯವಿವಾಹ ಇವು ಅಧಿಕ ಪುರುಷ ಮತ್ತು ಅಧಿಕ ಮಹಿಳೆಯರ ಸಮಸ್ಯೆಯನ್ನು ಬಗೆಹರಿಸಿ ಸಗೋತ್ರ ವಿವಾಹ ಪದ್ಧತಿಯನ್ನು ಉಳಿಸಿಕೊಳ್ಳಲು ಹುಟ್ಟಿದ ಆಚರಣೆಗಳು.

ಸಮಾಜ ವ್ಯಕ್ತಿಗಳಿಂದ ಕೂಡಿದೆ ಎನ್ನುವುದಕ್ಕಿಂತ ವರ್ಗಗಳಿಂದ ರಚನೆಯಾಗಿದೆ ಎನ್ನುವುದೇ ಸೂಕ್ತ. ವ್ಯಕ್ತಿ ಯಾವಾಗಲೂ ಯಾವುದಾದರೂ ಒಂದು ವರ್ಗಕ್ಕೆ ಸೇರಿದವನಾಗಿರುತ್ತಾನೆ. ಈ ಸಾಮಾನ್ಯ ಸೂತ್ರವನ್ನು ಗಮನದಲ್ಲಿಟ್ಟುಕೊಂಡರೆ ಜಾತಿಯ ಹುಟ್ಟನ್ನು ತಿಳಿಯುವುದು ಸುಲಭ, ಇದರಿಂದ ವರ್ಗಗಳು ಜಾತಿಗಳಾದುದಕ್ಕೆ ವಿವರಣೆ ಸಿಗುತ್ತದೆ. ವರ್ಗ ಮತ್ತು ಜಾತಿ ಇವೆರಡು ನೆರೆ-ಹೊರೆಯವು. ಜಾತಿ ಬಾಗಿಲು ಮುಚ್ಚಿಕೊಂಡ ವರ್ಗ. ಮೊದಲು ಬಾಗಿಲು ಮುಚ್ಚಿಕೊಂಡ ವರ್ಗ ಯಾವುದು? ಈ ಪ್ರಶ್ನೆಗೆ ಉತ್ತರ ಜಾತಿಯ ಹುಟ್ಟು ಮತ್ತು ಬೆಳವಣಿಗೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ನಾನು ಮೇಲೆ ಸೂಚಿಸಿದ ಪದ್ಧತಿಗಳು ಬ್ರಾಹ್ಮಣ ಜಾತಿಯಲ್ಲಿ ಮಾತ್ರ ಬಳಕೆಯಲ್ಲಿರುವಂತಹವು. ಈ ಜಾತಿ ಶ್ರೇಣೀಕೃತ ಹಿಂದೂ ಸಮಾಜದಲ್ಲಿ ಉನ್ನತ ಸ್ಥಾನವನ್ನು ಆಕ್ರಮಿಸಿದೆ. ಬ್ರಾಹ್ಮಣೇತರ ಜಾತಿಗಳಲ್ಲಿ ಈ ಪದ್ಧತಿಗಳು ಕಡ್ಡಾಯವಲ್ಲ.

(ಮುಂದುವರೆಯುವುದು)

ಈ ಪತ್ರಿಕೆಯು ರಾಮದೇವ ರಾಕೆಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಎಚ್. ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ : 5ಎ-ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ. ಬೆಂಗಳೂರು-560002.